# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1595
ಸದಸ್ಯರ ಹೆಸರು : ಶ್ರೀ ಮುನಿರಾಜು ಗೌಡ ಪಿ.ಎಂ
ಉತ್ತರಿಸುವ ದಿನಾಂಕ : 11.03.2022.
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಗಂಗಾ ಕಲ್ಯಾಣ ಯೋಜನೆಗಳ ಅನುಷ್ಠಾನದಲ್ಲಿ ಆಗುತ್ತಿರುವ ವಿಳಂಬದಿಂದ ಫಲಾನುಭವಿಗಳು ತೊಂದರೆಗೆ ಸಿಲುಕುತ್ತಿರುವುದು ಸರ್ಕಾರ ಗಮನಕ್ಕೆ ಬಂದಿದಿಯೇ; | ಬಂದಿದೆ.<br>2019-20 ಮತ್ತು 2020-21 ನೇ ಸಾಲಿನ ಕೊಳವೆಬಾವಿಗಳನ್ನು ಕೊರೆಯಲು, ಪಂಪ್ಸೆಟ್ ಸರಬರಾಜು, ಅಳವಡಿಕೆ ಮತ್ತು ವಿದ್ಯುದ್ದೀಕರಣ ಕೆಲಸಗಳನ್ನು ಒಟ್ಟಿಗೆ ನಿರ್ವಹಿಸಲು ಟೆಂಡರ್ ಆಹ್ವಾನಿಸಿದ ಸಂದರ್ಭದಲ್ಲಿ ಕೆಲವು ಗುತ್ತಿಗೆದಾರರು ಮಾನ್ಯ ಕರ್ನಾಟಕ ಉಚ್ಚನ್ಯಾಯಲಯ, ಬೆಂಗಳೂರು, ಕಲಬುರಗಿ ಮತ್ತು ಧಾರವಾಡ ಬೆಂಚ್‌ಗಳಲ್ಲಿ ದಾವೆ ಹೂಡಿ ಟೆಂಡರ್ ಪ್ರಕ್ರಿಯೆಗೆ ತಡೆಯಾಜ್ಞೆ ತಂದಿದ್ದ ಕಾರಣ ವಿಳಂಭವಾಗಿರುತ್ತದೆ. |
| ಆ) | ಕಾಲಮಿತಿಯಲ್ಲಿ ಗಂಗಾ ಕಲ್ಯಾಣ ಯೋಜನೆ ಕಾರ್ಯಗತವಾಗದೆ ವಿಳಂಬವಾಗುತ್ತಿರುವ ಬಗ್ಗೆ ಸರ್ಕಾರದಿಂದ ಪರಿಶೀಲನೆ ನಡೆಸಲಾಗಿದೆಯೇ; | ಪರಿಶೀಲನೆ ನಡೆಸಲಾಗಿದೆ. |
| ಇ) | ಗಂಗಾ ಕಲ್ಯಾಣ ಯೋಜನೆಯು ಕಾಲಮಿತಿಯಲ್ಲಿ ಕಾರ್ಯಗತವಾಗದೇ ಫಲಾನುಭವಿಗಳು ತೊಂದರೆಗೆ ಸಿಲುಕಿರುವುದನ್ನು ಪರಿಹರಿಸುವ ನಿಟ್ಟಿನಲ್ಲಿ ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | ಕರ್ನಾಟಕ ಉಚ್ಚನ್ಯಾಯಲಯ, ಬೆಂಗಳೂರು, ಕಲಬುರಗಿ ಮತ್ತು ಧಾರವಾಡ ಬೆಂಚ್‌ಗಳಲ್ಲಿ ದಾಖಲಾಗಿದ್ದ ದಾವೆಗಳಲ್ಲಿ ನೀಡಲಾಗಿದ್ದ ತಡೆಯಾಜ್ಞೆಯನ್ನು ದಿನಾಂಕ: 31.08.2021 ರಂದು ತೆರವುಗೊಳಸಲಾಗಿರುತ್ತದೆ. ನಂತರದಲ್ಲಿ ಟೆಂಡರ್ ಪ್ರಕ್ರಿಯೆ ಅಂತಿಮಗೊಳಿಸಿ 30 ಪ್ಯಾಕೇಜ್ಗಳಿಗೆ ದಿನಾಂಕ:13.01.2022 ರಂದು ಹಾಗೂ 17.02.2022 ರಂದು ಕಾರ್ಯಾದೇಶ ನೀಡಲಾಗಿದೆ. ಕೊಳವೆಬಾವಿ ಕೊರೆಯುವ ಕೆಲಸ ಮತ್ತು ಅವುಗಳಿಗೆ ಪಂಪ್ಸೆಟ್ ಸರಬರಾಜು, ಅಳವಡಿಕೆ ಕೆಲಸ ಪ್ರಗತಿಯಲ್ಲಿದೆ. |

..2

| | | |
|---|---|---|
| | | ಗಂಗಾ ಕಲ್ಯಾಣ ಯೋಜನೆಗಳ ಅನುಷ್ಠಾನದಲ್ಲಿ ಆಗುತ್ತಿರುವ ವಿಳಂಬವನ್ನು ತಪ್ಪಿಸಲು ಕೊಳವೆಬಾವಿ ಕೊರೆಯುವ, ಪಂಪ್ಸೆಟ್ ಸರಬರಾಜು ಅಳವಡಿಕೆ ಮತ್ತು ವಿದ್ಯುದ್ದೀಕರಣ ಕೆಲಸಗಳನ್ನು ಒಟ್ಟಿಗೆ ಟರ್ನ್-ಕೀ ಆಧಾರದಲ್ಲಿ ನಿರ್ವಹಿಸಲು ಕ್ರಮ ಕೈಗೊಳ್ಳಲಾಗಿದೆ. |

**ಸಂಖ್ಯೆ: ಸಕಇ 110 ಆರ್&ಐ 2022**

**(ಕೋಟ ಶ್ರೀನಿವಾಸ ಪೂಜಾರಿ)**
ಸಮಾಜ ಕಲ್ಯಾಣ ಹಾಗೂ ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು.